# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 701

ಸದಸ್ಯರ ಹೆಸರು : ಶ್ರೀ ರಘುನಾಥ್ ರಾವ್ ಮಲ್ಕಾಪುರೆ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 25/09/2020

<table>
<tr><th>ಕ್ರ ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ.</td><td>ಬೀದರ್ ಜಿಲ್ಲೆಯಲ್ಲಿರುವ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಗೆ 2017-18 ರಿಂದ 2019-20ನೇ ಸಾಲಿನವರೆಗೆ ಅಂಗನವಾಡಿ ಮಕ್ಕಳಿಗೆ ಬಾಣಂತಿಯರಿಗೆ ಗರ್ಭಿಣಿಯರಿಗೆ ನೀಡುವ ಆಹಾರ ಪೂರೈಕೆ ಕುರಿತು ಎಷ್ಟು ಅನುದಾನ ಮಂಜೂರು ಮಾಡಲಾಗಿದೆ; (ತಾಲ್ಲೂಕುವಾರು ಮಾಹಿತಿ ನೀಡುವುದು.)</td><td>ಬೀದರ್ ಜಿಲ್ಲೆಗೆ ಪೂರಕ ಪೌಷ್ಠಿಕ ಆಹಾರ ಕಾರ್ಯಕ್ರಮದಡಿ ಕಳೆದ 3 ವರ್ಷಗಳಲ್ಲಿ ಮಂಜೂರು ಮಾಡಲಾದ ತಾಲ್ಲೂಕುವಾರು ಅನುದಾನದ ವಿವರ ಈ ಕೆಳಕಂಡಂತಿದೆ.<br><br><table>
<tr><th rowspan="2">ಕ್ರ ಸಂ.</th><th rowspan="2">ತಾಲ್ಲೂಕು</th><th colspan="3">ಮಂಜೂರು ಮಾಡಲಾದ ಅನುದಾನ (ರೂ.ಲಕ್ಷಗಳಲ್ಲಿ)</th></tr>
<tr><th>2017-18</th><th>2018-19</th><th>2019-20</th></tr>
<tr><td>1</td><td>ಬೀದರ್</td><td>1836.48</td><td>1905.21</td><td>1910.37</td></tr>
<tr><td>2</td><td>ಭಾಲ್ಕಿ</td><td>1551.38</td><td>1386.10</td><td>1391.26</td></tr>
<tr><td>3</td><td>ಬಸವಕಲ್ಯಾಣ</td><td>1715.07</td><td>1680.52</td><td>1685.68</td></tr>
<tr><td>4</td><td>ಹುಮನಾಬಾದ್</td><td>1400.10</td><td>1335.96</td><td>1341.14</td></tr>
<tr><td>5</td><td>ಸಂತಪುರ</td><td>1392.74</td><td>1432.54</td><td>1437.46</td></tr>
</table></td></tr>
<tr><td>ಆ.</td><td>ಈ ಅನುದಾನವನ್ನು ಸಮರ್ಪಕವಾಗಿ ಉಪಯೋಗಿಸಿಕೊಳ್ಳಲಾಗಿದೆಯೇ;</td><td>ಹೌದು.</td></tr>
<tr><td>ಇ.</td><td>ಆಹಾರ ಪೂರೈಕೆಯನ್ನು ಯಾವ ಯಾವ ಏಜೆನ್ಸಿಯವರಿಗೆ ಗುತ್ತಿಗೆ ನೀಡಲಾಗಿದೆ; ಗುತ್ತಿಗೆಯ ಕರಾರುಗಳೇನು; (ಮಾಹಿತಿ ನೀಡುವುದು.)</td><td>ಆಹಾರ ಪೂರೈಕೆಗೆ ಯಾವುದೇ ಏಜೆನ್ಸಿಗೆ ಗುತ್ತಿಗೆ ನೀಡಿರುವುದಿಲ್ಲ. ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಅಂಗನವಾಡಿ ಕೇಂದ್ರಗಳಿಗೆ ಆಹಾರ ಪದಾರ್ಥಗಳನ್ನು ಸರಬರಾಜು ಮಾಡಲು ಇಲಾಖಾ ವತಿಯಿಂದ 137 ಮಹಿಳಾ ಪೂರಕ ಪೌಷ್ಠಿಕ ಆಹಾರ ಉತ್ಪಾದನಾ ಮತ್ತು ತರಬೇತಿ ಕೇಂದ್ರ (ಎಂ.ಎಸ್.ಪಿ.ಟಿ.ಸಿ.) ಗಳನ್ನು ಸ್ಥಾಪಿಸಲಾಗಿದೆ. ಬೀದರ್ ಜಿಲ್ಲೆಯಲ್ಲಿರುವ 05 ಎಂ.ಎಸ್.ಪಿ.ಟಿ.ಸಿ. ಗಳು ಪೂರಕ ಪೌಷ್ಠಿಕ ಆಹಾರವನ್ನು ಸರಬರಾಜು ಮಾಡುತ್ತಿವೆ.</td></tr>
</table>

| | | |
|---|---|---|
| ಈ. | ಆಹಾರ ಪದಾರ್ಥಗಳನ್ನು ಖರೀದಿಸಲು ಇರುವ ಮಾನದಂಡಗಳೇನು ಹಾಗೂ ನಿಯಮಗಳೇನು; ಖರೀದಿಸಿರುವ ಪ್ರಕರಣಗಳೇನಾದರೂ ಬೆಳಕಿಗೆ ಬಂದಿವೆಯೇ; ಬಂದಿದ್ದಲ್ಲಿ ಸಂಪೂರ್ಣ ಮಾಹಿತಿ ನೀಡುವುದು? | ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದಲ್ಲಿ ಸಮಿತಿಯನ್ನು ರಚಿಸಲಾಗಿದೆ. ಈ ಸಮಿತಿಯು ಆಹಾರ ಪದಾರ್ಥಗಳ ಬೆಲೆಯನ್ನು ಹಾಗೂ ಮೆನುವನ್ನು ನಿರ್ಧರಿಸುತ್ತದೆ. ಮೆನುವಿನ ಆಧಾರದ ಮೇಲೆ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಆಹಾರ ಪದಾರ್ಥಗಳಿಗೆ ಬೇಡಿಕೆಯನ್ನು ಸಲ್ಲಿಸುತ್ತಾರೆ. ಬೇಡಿಕೆಯಂತೆ ಮಹಿಳಾ ಪೂರಕ ಪೌಷ್ಠಿಕ ಆಹಾರ ಉತ್ಪಾದನಾ ಮತ್ತು ತರಬೇತಿ ಕೇಂದ್ರ (ಎಂ.ಎಸ್.ಪಿ.ಟಿ.ಸಿ.) ಗಳು ಜಿಲ್ಲಾಧಿಕಾರಿಗಳು ನಿಗದಿಪಡಿಸಿರುವ ದರದಲ್ಲಿ ಆಹಾರ ಪದಾರ್ಥಗಳನ್ನು ಸರಬರಾಜು ಮಾಡುತ್ತವೆ.<br><br>ಅಂಗನವಾಡಿ ಕೇಂದ್ರಗಳಿಗೆ ಆಹಾರ ಪದಾರ್ಥಗಳನ್ನು ಸರಬರಾಜು ಮಾಡುವ ಮುನ್ನ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಪ್ರಯೋಗಾಲಯಗಳಲ್ಲಿ ಗುಣಮಟ್ಟದ ಬಗ್ಗೆ ಪರಿಶೀಲಿಸಲಾಗುತ್ತಿದೆ. ಆಹಾರ ಸಾಮಗ್ರಿಗಳು ತೀರ ಕಳಪೆ ಮಟ್ಟದ್ದಾಗಿರುವ ಬಗ್ಗೆ ಯಾವುದೇ ದೂರುಗಳು ದಾಖಲಾಗಿರುವುದಿಲ್ಲ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 183 ಐಸಿಡಿ 2020